## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**1974ರ ಅಧಿನಿಯಮ ಸಂಖ್ಯೆ 22.–** ಕರ್ನಾಟಕ ಆರ್ಥಿಕ ಸಂಹಿತೆಯ 404ನೆಯ ಅನುಚ್ಛೇದದಲ್ಲಿ ಇರುವ ಉಪಬಂಧಗಳಲ್ಲಿ ಜನನ ರಿಜಿಸ್ಟರು ಅಥವಾ ಬ್ಯಾಪ್ಟಿಸ್ಮಲ್ ರಿಜಿಸ್ಟರು ಅಥವಾ ಎಸ್.ಎಸ್.ಎಲ್.ಸಿ. ಪ್ರಮಾಣಪತ್ರ ಅಫಿಡಾವಿಟ್ಟು ಇತ್ಯಾದಿಗಳಿಂದ ದೃಢೀಕೃತ ಉದ್ಧೃತ ಭಾಗಗಳಿಂದ ಕೆಲವು ದಸ್ತಾವೇಜುಗಳನ್ನು ನೋಡಿ. ಓದಿ ಜನ್ಮ ದಿನಾಂಕವನ್ನು ಖಚಿತಪಡಿಸಿಕೊಳ್ಳುವ ಕಾರ್ಯವಿಧಾನವನ್ನು ಗೊತ್ತುಪಡಿಸಲಾಗಿದೆ.

ಕರ್ನಾಟಕ ಆರ್ಥಿಕ ಸಂಹಿತೆಯ ಉಪಬಂಧಗಳನ್ನು ಭಾರತ ಸಂವಿಧಾನದ ಮೇರಗೆ ಕಲ್ಪಿಸಿದ್ದರೂ. ಸರ್ಕಾರಿ ನೌಕರರ ವಯೋನಿವೃತ್ತಿಯ ದಿನಾಂಕವನ್ನು ಖಚಿತಪಡಿಸಿಕೊಳ್ಳುವ ವಿಷಯದಲ್ಲಿ ಜನ್ಮ ದಿನಾಂಕವನ್ನು ಸಿವಿಲ್ ನ್ಯಾಯಾಲಯಗಳು ನಿರ್ಧರಿಸದಂತೆ ಹೊರತುಪಡಿಸುವ ಬಲ ಆ ಉಪಬಂಧಗಳಿಗೆ ಇಲ್ಲ. ಹೀಗಾಗಿ ವಯೋನಿವೃತ್ತಿಯ ದಿನಾಂಕಕ್ಕೆ ಮುಂಚೆ, ಯಾವಾಗಲೋ ತಮ್ಮ ಜನ್ಮ ದಿನಾಂಕಗಳನ್ನು ಪುನಃ ಖಚಿತಪಡಿಸಿಕೊಳ್ಳುವುದಕ್ಕೆ ಸರ್ಕಾರಿ ನೌಕರರಿಗೆ ದಾವೆಗಳನ್ನು ಹೂಡಲು ಆಸ್ಪದವಾಗಿದೆ ಮತ್ತು ಕೆಲವು ಪ್ರಕರಣಗಳಲ್ಲಿ ಜನ್ಮ ದಿನಾಂಕವನ್ನು ಖಚಿತಪಡಿಸಲು ಡಿಕ್ರಿಗಳು ಆಗಿವೆ. ಹಾಗಾಗಿ ಕರ್ನಾಟಕ ಆರ್ಥಿಕ ಸಂಹಿತೆಯ 404ನೇ ಅನುಚ್ಛೇದದ ಮೇರೆಗೆ ಖಚಿತಪಡಿಸಿಕೊಂಡಿದ್ದ ಜನ್ಮ ದಿನಾಂಕ ಹಲವು ಪ್ರಕರಣಗಳಲ್ಲಿ ಬೇರೆಯದೇ ಆಗಿದೆ.

ಸೇವೆಯ ಉದ್ದೇಶಗಳಿಗಾಗಿ ನೌಕರರ ವಯಸ್ಸನ್ನು ಎಲ್ಲ ಸುಸಂಗತ ದಾಖಲೆಗಳನ್ನು ಸರ್ಕಾರವು ಪರಿಗಣನೆಗೆ ತೆಗೆದುಕೊಂಡೇ ಖಚಿತಪಡಿಸಿಕೊಳ್ಳಬೇಕಾಗುತ್ತದೆ. ಆದ್ದರಿಂದ ಈ ಅಧಿಕಾರವನ್ನು ಸರ್ಕಾರದಲ್ಲಿ ನಿಹಿತಗೊಳಿಸುವುದು ಮತ್ತು ಭಾರತ ಸಂವಿಧಾನದ 235ನೇ ಅನುಚ್ಛೇದದ ಮೇರೆಗೆ ಉಚ್ಚ ನ್ಯಾಯಾಲಯದ ನಿಯಂತ್ರಣಕ್ಕೆ ಒಳಪಟ್ಟು ಕೆಲಸ ಮಾಡುತ್ತಿರುವ ನೌಕರನಾಗಿದ್ದರೆ ಆ ಅಧಿಕಾರವನ್ನು ಉಚ್ಚ ನ್ಯಾಯಾಲಯದಲ್ಲಿ ನಿಹಿತಗೊಳಿಸುವುದು ಮತ್ತು ಈ ವಿಷಯದಲ್ಲಿ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಯನ್ನು ಹೊರತುಪಡಿಸುವುದು ಅವಶ್ಯಕವೆಂದು ಭಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ,

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV 2 (ಎ) ಸಂಖ್ಯೆ: 308, ದಿನಾಂಕ: 28–03–1973ರ ಪುಟ 6 ರಲ್ಲಿ ಪ್ರಕಟಿಸಲಾಗಿದೆ)

II

**1977ರ ತಿದ್ದುಪಡಿ ಅಧಿನಿಯಮ ಸಂಖ್ಯೆ 22.–** 1974ರ ಕರ್ನಾಟಕ ರಾಜ್ಯ ನೌಕರರ (ವಯಸ್ಸನ್ನು ಖಚಿತಪಡಿಸಿಕೊಳ್ಳುವಿಕೆ) ಅಧಿನಿಯಮವು, ಸರ್ಕಾರಿ ನೌಕರರ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಖಚಿತಪಡಿಕೊಳ್ಳುವ ವಿಷಯಗಳಲ್ಲಿ ನ್ಯಾಯಲಯಗಳ ಅಧಿಕಾರ ವ್ಯಾಪ್ತಿಯನ್ನು ನಿಷೇಧಿಸಿದೆ. ಆದರೆ ಕೆಲವು ಪ್ರಕರಣಗಳಲ್ಲಿ ವ್ಯಕ್ತಿಗಳು ಸರ್ಕಾರಿ ಸೇವೆಗೆ ಸೇರುವುದಕ್ಕೂ ಮುಂಚೆ ಅವರ ವಯಸ್ಸಿಗೆ ಸಂಬಂಧಪಟ್ಟಂತೆ ನ್ಯಾಯಾಲಯಗಳಿಂದ ಘೋಷಣೆಗಳನ್ನು ಪಡೆದುಕೊಂಡು ಅವರ ಜನ್ಮ ದಿನಾಂಕದ ಮತ್ತು ವಯಸ್ಸಿನ ರುಜುವಾತೆಂದು ಅವುಗಳನ್ನು ಹಾಜರುಪಡಿಸುತ್ತಾರೆ. ಪರಿಶೀಲನೆ ಮಾಡದೆಯೇ ಅಂಥ ಘೋಷಣೆಗಳನ್ನು ಒಪ್ಪಿಕೊಳ್ಳುವುದು ಸರಿಯಾಗಲಾರದು. ಏಕೆಂದರೆ ಈ ಪ್ರಕರಣಗಳಲ್ಲಿ ಸರಿಯಾಗಿ ವಾದಗಳ ಮಂಡನೆ ಆಗದೆಯೇ ಅಂಥ ಘೋಷಣೆಗಳು ಹೊರಬಂದಿರುವ ಸಾಧ್ಯತೆ ಇರುತ್ತದೆ. ವಾದಿಯು ಸರ್ಕಾರಿ ನೌಕರನೇ ಅಲ್ಲವಾದ್ದರಿಂದ ಸರ್ಕಾರದ ಹಿತಾಸಕ್ತಿಗಳಿಗೆ ಅಂಥವು ಸಂಬಂಧಪಡುವುದೇ ಇಲ್ಲ.

ಅಂಥ ಪ್ರಕರಣಗಳಲ್ಲಿ ಪ್ರತಿಯೊಂದು ದಾವೆಯಲ್ಲೂ ಸರ್ಕಾರವು ಒಂದು ಪಕ್ಷಕಾರವಾಗಿದ್ದರೂ ಆ ಪ್ರಕರಣಗಳಲ್ಲಿ ಸರ್ಕಾರದ ಹಿತಾಸಕ್ತಿಗಳು ನೇರವಾಗಿ ಒಳಗೊಂಡಿರುವುದಿಲ್ಲವಾದ್ದರಿಂದ ಸರಿಯಾಗಿ ವಾದ ಮಂಡನೆಗಳು ಆಗದೇ ಇರಬಹುದು.

ಆದ್ದರಿಂದ, ಸರ್ಕಾರಿ ಸೇವೆಗೆ ಸೇರುವುದಕ್ಕೂ ಮುಂಚೆ ಆ ವ್ಯಕ್ತಿಯು ಪಡೆದುಕೊಂಡಿರುವ ಡಿಕ್ರಿಗೆ ಸರ್ಕಾರ ಬದ್ಧವಾಗಿರಬೇಕಾಗಿಲ್ಲವೆಂದು ಮತ್ತು ಅಂಥ ವ್ಯಕ್ತಿಯ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಸರ್ಕಾರಿ ಸೇವೆಗೆ ಆ ವ್ಯಕ್ತಿಯು ಸೇರಿದ ನಂತರ ಅಧಿನಿಯಮಕ್ಕೆ ಅನುಸಾರವಾಗಿ ಖಚಿತಪಡಿಸಿಕೊಳ್ಳತಕ್ಕದೆಂದು ಅಧಿನಿಯಮಕ್ಕೆ ತಿದ್ದುಪಡಿ ತರಲು ಉದ್ದೇಶಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV 2 (ಎ) ಸಂಖ್ಯೆ 534, ದಿನಾಂಕ: 08–07–1977ರ ಪುಟ 3 ರಲ್ಲಿ ಪ್ರಕಟಿಸಲಾಗಿದೆ)

III

**1982ರ ತಿದ್ದುಪಡಿ ಅಧಿನಿಯಮ ಸಂಖ್ಯೆ 22.–** ಕರ್ನಾಟಕ ರಾಜ್ಯ ನೌಕರರ (ವಯಸ್ಸನ್ನು ಖಚಿತಪಡಿಸಿಕೊಳ್ಳುವಿಕೆ) ಅಧಿನಿಯಮ, 1974ರ 3ನೇ ಪ್ರಕರಣದಲ್ಲಿ, ವ್ಯಕ್ತಿಯು ರಾಜ್ಯ ಸೇವೆಗೆ ಸೇರಿದ ನಂತರ ಆತನ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಖಚಿತಪಡಿಸಿಕೊಳ್ಳುವಾಗ ಮತ್ತು ಒಪ್ಪಿಕೊಳ್ಳುವಾಗ ಸಂಬಂಧಪಟ್ಟ ನೇಮಕ ಪ್ರಾಧಿಕಾರವು ಅನುಸರಿಸಬೇಕಾದ ಕಾರ್ಯವಿಧಾನಗಳನ್ನು ಗೊತ್ತುಪಡಿಸಲಾಗಿದೆ. ಜನನ ರಿಜಿಸ್ಟರಿನ ಅಥವಾ ಬ್ಯಾಪ್ಟಿಸ್ಮಲ್ ರಿಜಿಸ್ಟರಿನ ಉದ್ಧೃತ ಭಾಗ, ಮೂಲ ಜಾತಕ ಮುಂತಾದಂಥ ಹಲವಾರು ದಾಖಲೆಗಳ ಆಧಾರದ ಮೇಲೆ ಅಥವಾ ಜನನ ಕಾಲವು ಮತ್ತು ಜನ್ಮ ದಿನಾಂಕವು ಶಾಲೆಯ ಅಥವಾ ಕಾಲೇಜಿನ ದಾಖಲೆಗಳು ಮುಂತಾದವುಗಳಲ್ಲಿ ಮಾಡಿರುವ ನಮೂದುಗಳೊಂದಿಗೆ ತಾಳೆ ಆಗಿರುವುದರ ಮೇಲೆ ನೇಮಕ ಪ್ರಾಧಿಕಾರವು ರಾಜ್ಯ ನೌಕರನ ವಯಸ್ಸನ್ನು ಖಚಿತಪಡಿಕೊಳ್ಳುವುದನ್ನು ಮತ್ತು ಜನನ ದಿನಾಂಕವನ್ನು ಒಪ್ಪಿಕೊಳ್ಳುವುದನ್ನು ಪರಿಗಣಿಸಬೇಕಾಗುತ್ತದೆ ಮತ್ತು ಆ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ.

2. ವ್ಯಾಪಕ ಕಾರ್ಯವಿಧಾನಗಳನ್ನು ಅನುಸರಿಸಬೇಕಾಗುತ್ತದೆ. ಈ ಉಪಬಂಧದ ದುರುಪಯೋಗದ ಸಾಧ್ಯತೆಯಷ್ಟೇ ಅಲ್ಲ ಅರ್ಜಿದಾರನ ವಯಸ್ಸನ್ನು ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಖಚಿತಪಡಿಸಿಕೊಂಡಿಲ್ಲ ಎಂಬ ಆಧಾರದ ಮೇಲೆ ಜನ್ಮ ದಿನಾಂಕದಲ್ಲಿ ಮಾರ್ಪಾಟು ಮಾಡಲು 5ನೇ ಪ್ರಕರಣದ ಮೇರೆಗೆ ಅನೇಕ ಸಂಖ್ಯೆಯ ಅರ್ಜಿಗಳು ಬಂದಿರುವ ನಿದರ್ಶನ ಸಹ ಇದೆ. ಆದ್ದರಿಂದ, ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವ ಅಥವಾ ಅದಕ್ಕೆ ತತ್ಸಮಾನವಾದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವ ವ್ಯಕ್ತಿಗಳಾಗಿದ್ದರೆ ಎಸ್.ಎಸ್.ಎಲ್.ಸಿ. ಸರ್ಟಿಫಿಕೇಟಿನಲ್ಲಿ ಅಥವಾ ನೇಮಕಾತಿಯ ಉದ್ದೇಶಗಳಿಗಾಗಿ ವಯಸ್ಸಿನ ರುಜುವಾತೆಂದು ಅಂಗೀಕರಿಸಿರುವ ಎಸ್.ಎಸ್.ಎಲ್.ಸಿ.ಗೆ ತತ್ಸಮಾನದವಾದ ಯಾವುದೇ ಇತರ ಪರೀಕ್ಷೆಯ ಸರ್ಟಿಫಿಕೇಟಿನಲ್ಲಿ ಜನ್ಮ ದಿನಾಂಕಕ್ಕೆ ಸಂಬಂಧಿಸಿದಂತೆ ಇರುವ ನಮೂದುಗಳ ಆಧಾರದ ಮೇಲೆ ರಾಜ್ಯ ನೌಕರನ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವುದಕ್ಕೆ ಉಪಬಂಧ ಕಲ್ಪಿಸಲು ಅಧಿನಿಯಮದ (3)ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಉದ್ದೇಶಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV 2 (ಎ) ಸಂಖ್ಯೆ 215, ದಿನಾಂಕ: 19–03–1982ರ ಪುಟ 3 ರಲ್ಲಿ ಪ್ರಕಟಿಸಲಾಗಿದೆ)

**IV**

**1984ರ ತಿದ್ದುಪಡಿ ಅಧಿನಿಯಮ ಸಂಖ್ಯೆ 13.–** ಕರ್ನಾಟಕ ರಾಜ್ಯ ನೌಕರರ (ವಯಸ್ಸನ್ನು ಖಚಿತಪಡಿಸಿಕೊಳ್ಳುವಿಕೆ) ಅಧಿನಿಯಮ, 1974ರ 3ನೇ ಪ್ರಕರಣದ (2)ನೇ ಉಪ–ಪ್ರಕರಣದ ಪ್ರಕಾರ, ರಾಜ್ಯ ಸಿವಿಲ್ ಸೇವೆಗಳಿಗೆ ವ್ಯಕ್ತಿಯು ಸೇರಿದಾಗ ಆ ರಾಜ್ಯ ನೌಕರನ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಖಚಿತಪಡಿಸಿಕೊಳ್ಳುವ ಅಧಿಕಾರವು ನೇಮಕ ಪ್ರಾಧಿಕಾರದಲ್ಲಿ ನಿಹಿತವಾಗಿದೆ. ಮುನ್ಸಿಫರುಗಳು ಸೇರಿದಂತೆ ನ್ಯಾಯಿಕ ಸೇವೆಗೆ ಸೇರುವವರಿಗೆ ರಾಜ್ಯಪಾಲರು ನೇಮಕ ಪ್ರಾಧಿಕಾರವಾಗಿರುತ್ತಾರೆ. ಹೀಗಾಗಿ ಮುನ್ಸಿಫ್ ಆಗಿ ನೇಮಕಗೊಂಡ ವ್ಯಕ್ತಿಗಳ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಖಚಿತಪಡಿಸಿಕೊಳ್ಳಲಾಗುತ್ತದೆ. ಅದಕ್ಕೆ ರಾಜ್ಯಪಾಲರ ಅನುಮೋದನೆಯನ್ನು ಪಡೆಯಲಾಗುತ್ತದೆ.

ಆ.ಇಂ.ರಿ. 1981 ಸರ್ವೋ.ನ್ಯಾ. 561ರಲ್ಲಿ ವರದಿಯಾಗಿರುವ (ಬಿ.ಎಸ್. ಯಾದವ್ ವಿರುದ್ಧ ಹರಿಯಾಣ ರಾಜ್ಯ) ಮೊಕದ್ದಮೆಯಲ್ಲಿ ಸರ್ವೋಚ್ಛ ನ್ಯಾಯಾಲಯವು ತೀರ್ಪು ನೀಡಿರುವುದರಿಂದಾಗಿ, ಸಾಮಾನ್ಯವಾಗಿ ಅನ್ವಯವಾಗುವಂಥ ನಿಯಮಗಳನ್ನು ರೂಪಿಸುವ ಸಲುವಾಗಿ ನ್ಯಾಯಿಕ ಅಧಿಕಾರಿಗಳ ಸೇವಾ ಷರತ್ತುಗಳನ್ನು ಗೊತ್ತುಪಡಿಸಲು ವಿಧಾನಮಂಡಲಕ್ಕೆ ಅಥವಾ ರಾಜ್ಯಪಾಲರಿಗೆ ಅಧಿಕಾರ ಇದ್ದರೂ, ಪ್ರತಿಯೊಬ್ಬ ನ್ಯಾಯಿಕ ಅಧಿಕಾರಿಯ ಸೇವಾ ಷರತ್ತುಗಳನ್ನು ಗೊತ್ತುಪಡಿಸುವ ಪ್ರಾಧಿಕಾರ ಯಾವುದೆಂದರೆ ಉಚ್ಚ ನ್ಯಾಯಾಲಯ. ಈ ತೀರ್ಪಿನಿಂದಾಗಿ ನ್ಯಾಯಿಕ ಅಧಿಕಾರಿಯ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಖಚಿತಪಡಿಸಿಕೊಳ್ಳುವ ಅಧಿಕಾರ ಉಚ್ಚ ನ್ಯಾಯಾಲಯದ ಅಧಿಕಾರ ವ್ಯಾಪ್ತಿಗೆ ಸೇರುತ್ತದೆ. ಆದ್ದರಿಂದ ಸದರಿ ಅಧಿನಿಯಮದ 3ನೇ ಪ್ರಕರಣವನ್ನು ಸೂಕ್ತವಾಗಿ ತಿದ್ದುಪಡಿ ಮಾಡುವುದು ಅವಶ್ಯಕವೆಂದು ಭಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV 2 (ಎ) ಸಂಖ್ಯೆ 719, ದಿನಾಂಕ: 12–08–1983ರ ಪುಟ 2 ರಲ್ಲಿ ಪ್ರಕಟಿಸಲಾಗಿದೆ)

**ಕರ್ನಾಟಕ ರಾಜ್ಯ ನೌಕರರ (ವಯಸ್ಸನ್ನು ಖಚಿತಪಡಿಸಿಕೊಳ್ಳುವಿಕೆ) ಅಧಿನಿಯಮ, 1974**

**(1974ರ ಕರ್ನಾಟಕ ಅಧಿನಿಯಮ ಸಂಖ್ಯೆ 22)**

**(1974ರ ಜೂನ್ ಹದಿನೆಂಟನೇ ದಿನದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)**

(1974ರ ಜೂನ್ ಹದಿನೈದರಿಂದ ರಾಜ್ಯಪಾಲರ ಅನುಮತಿ ಪಡೆದಿದೆ)

(ಅಧಿನಿಯಮ ಸಂಖ್ಯೆಗಳು 1977ರ 22, 1982ರ 22

ಮತ್ತು 1984ರ 13ರ ಮೂಲಕ ತಿದ್ದುಪಡಿಯಾದಂತೆ)

**ರಾಜ್ಯ ನೌಕರರ ವಯಸ್ಸನ್ನು ಖಚಿತಪಡಿಸಿಕೊಳ್ಳುವುದಕ್ಕೆ ಉಪಬಂಧ ಕಲ್ಪಿಸುವ ಅಧಿನಿಯಮ**

ರಾಜ್ಯ ನೌಕರರ ವಯಸ್ಸನ್ನು ಅದು ಅವರ ಸೇವಾ ಷರತ್ತುಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ ಖಚಿತಪಡಿಸಿಕೊಳ್ಳುವುದಕ್ಕಾಗಿ ಉಪಬಂಧ ಕಲ್ಪಿಸುವುದು ವಿಹಿತವಾಗಿರುವುದರಿಂದ :

ಇದು, ಭಾರತ ಗಣರಾಜ್ಯದ ಇಪ್ಪತ್ತೈದನೆಯ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು :–

1. **ಚಿಕ್ಕ ಹೆಸರು.–** ಈ ಅಧಿನಿಯಮವನ್ನು, ಕರ್ನಾಟಕ ರಾಜ್ಯ ನೌಕರರ (ವಯಸ್ಸನ್ನು ಖಚಿತಪಡಿಸಿಕೊಳ್ಳುವಿಕೆ) ಅಧಿನಿಯಮದ, 1974 ಎಂದು ಕರೆಯತಕ್ಕದ್ದು.

2. **ಪರಿಭಾಷೆ.–** ಈ ಅಧಿನಿಯಮದಲ್ಲಿ **"ರಾಜ್ಯ ನೌಕರ"** ಎಂದರೆ, ಕರ್ನಾಟಕ ರಾಜ್ಯದ ಸಿವಿಲ್ ಸೇವೆಯಲ್ಲಿರುವ ಅಥವಾ ಕರ್ನಾಟಕ ರಾಜ್ಯದ ಅಧೀನದಲ್ಲಿರುವ ಸಿವಿಲ್ ಹುದ್ದೆಯನ್ನು ಧಾರಣ ಮಾಡಿರುವ ವ್ಯಕ್ತಿ.

3. **ರಾಜ್ಯ ಸೇವೆಗಳಿಗೆ ಸೇರಿದ ಮೇಲೆ ವಯಸ್ಸನ್ನು ಖಚಿತಪಡಿಸಿಕೊಳ್ಳುವುದು.–** (1) ಪ್ರತಿಯೊಬ್ಬ ವ್ಯಕ್ತಿಯು ರಾಜ್ಯ ನೌಕರನಾಗಿ ನೇಮಕಗೊಂಡಾಗ ಜನ್ಮ ದಿನಾಂಕದ ಸಹಿತ ತನ್ನ ವಯಸ್ಸನ್ನು ಘೋಷಿಸತಕ್ಕದ್ದು ಮತ್ತು ಅಂತಹ ಘೋಷಣೆಗೆ ಸಮರ್ಥನೆಯಾಗಿ ನೇಮಕ ಪ್ರಾಧಿಕಾರಕ್ಕೆ ದಸ್ತಾವೇಜಿಯ ರುಜುವಾತನ್ನು ಎಂದರೆ, ಜನನ ರಿಜಿಸ್ಟರಿನ ಅಥವಾ ಬ್ಯಾಪ್ಟಿಸ್ಮಲ್ ರಿಜಿಸ್ಟರಿನ, ಮೂಲ ಜಾತಕದ ಅಥವಾ ಜನನ ದಿನಾಂಕವು ಮತ್ತು ಜನನ ಕಾಲವು ಅದೇ ಕಾಲದಲ್ಲಿ ತಾಳೆಯಾಗುವಂಥವುಗಳ ದೃಢೀಕೃತ ಉದ್ಧೃತ ಭಾಗವನ್ನು, ಶಾಲೆಯ ಅಥವಾ ಕಾಲೇಜಿನ ದಾಖಲೆಗಳಲ್ಲಿ ಜನ್ಮ ದಿನಾಂಕವನ್ನು ತೋರಿಸುವ ನಮೂದುಗಳ ದೃಢೀಕೃತ ಪ್ರತಿಯನ್ನು ಅಥವಾ ಅಂಥ ನಮೂದುಗಳ ದೃಢೀಕೃತ ಉದ್ಧೃತ ಭಾಗಗಳನ್ನು ಒದಗಿಸತಕ್ಕದ್ದು:

ಪರಂತು, ಅಂತಹ ದಸ್ತಾವೇಜು ಲಭ್ಯವಿಲ್ಲದಿರುವಾಗ, ಅದು ಲಭ್ಯವಾಗದಿರುವುದಕ್ಕೆ ಕಾರಣಗಳನ್ನು ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಘೋಷಿಸಲು ಸಮರ್ಥನೆ ಒದಗಿಸುವಂತೆ ನೇಮಕ ಪ್ರಾಧಿಕಾರವು ಕೇಳಬಹುದಾದಂಥ ಇತರ ದಸ್ತಾವೇಜಿಯ ರುಜುವಾತಿನ ಸಹಿತ ಒದಗಿಸತಕ್ಕದ್ದು.

(2) ನೇಮಕ ಪ್ರಾಧಿಕಾರವು, [1][ಯಾವುದೇ ನ್ಯಾಯಾಲಯದ ಯಾವುದೇ ತೀರ್ಪಿನಲ್ಲಿ, ಡಿಕ್ರಿಯಲ್ಲಿ ಅಥವಾ ಆದೇಶದಲ್ಲಿ ಏನೇ ಒಳಗೊಂಡಿದ್ದರೂ][1] ರಾಜ್ಯ ನೌಕರನು ಹಾಜರುಪಡಿಸಿದ ರುಜುವಾತನ್ನು ಪರಿಗಣಿಸಿದ ನಂತರ ಮತ್ತು ಸೂಕ್ತವೆಂದು ಅದು ಭಾವಿಸಿದ ವಿಚಾರಣೆಯನ್ನು ಮಾಡಿದ ತರುವಾಯ, ಸರಿಯಾದ ವಯಸ್ಸು ಮತ್ತು ಜನ್ಮ ದಿನಾಂಕದೆಂದು ಅದು ಅಭಿಪ್ರಾಯಕ್ಕೆ ಬಂದಿರುವಂಥ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಒಪ್ಪಿಕೊಳ್ಳತಕ್ಕದ್ದು, ಮತ್ತು ಅದನ್ನು ರಾಜ್ಯ ನೌಕರನಿಗೆ ತಿಳಿಸತಕ್ಕದ್ದು; ಮತ್ತು ಹಾಗೆ ಒಪ್ಪಿಕೊಂಡ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ರಾಜ್ಯ ನೌಕರನ

ಸೇವಾ ರಿಜಿಸ್ಟರಿನಲ್ಲಿ ಅಥವಾ ಸೇವಾ ಪುಸ್ತಕದಲ್ಲಿ ಅಥವಾ ಯಾವುದೇ ಇತರ ಸೇವಾ ದಾಖಲೆಯಲ್ಲಿ ದಾಖಲಿಸತಕ್ಕದ್ದು ಅಥವಾ ದಾಖಲಿಸುವಂತೆ ಮಾಡತಕ್ಕದ್ದು.

ಪರಂತು, ರಾಜ್ಯ ನೌಕರನಾದ ತರುವಾಯ, ಅವನು ಅನುಚ್ಛೇದ 235ರ ಮೇರೆಗೆ ಉಚ್ಚನ್ಯಾಯಾಲಯದ ನಿಯಂತ್ರಣಕ್ಕೊಳಪಟ್ಟಿದ್ದರೆ ಆ ರಾಜ್ಯ ನೌಕರನ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಸಿವಿಲ್ ನ್ಯಾಯಾಲಯದ ಡಿಕ್ರಿಯು ಖಚಿತಪಡಿಸಿದ್ದರೆ ಹಾಗೆ ಖಚಿತವಾದ, ಅದು ಈ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮುಂಚೆ ಅಂತಿಮವಾದುದಾಗಿದ್ದರೆ ಅಂಥ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಒಪ್ಪಿಕೊಳ್ಳತಕ್ಕದ್ದು ಮತ್ತು ಆ ರಾಜ್ಯ ನೌಕರನ ಸೇವಾ ರಿಜಿಸ್ಟರ್‌ನಲ್ಲಿ ಅಥವಾ ಪುಸ್ತಕದಲ್ಲಿ ಅಥವಾ ಯಾವುದೇ ಇತರ ದಾಖಲೆಯಲ್ಲಿ ದಾಖಲಿಸತಕ್ಕದ್ದು ಅಥವಾ ದಾಖಲಿಸುವಂತೆ ಮಾಡತಕ್ಕದ್ದು :

1. ಅಧಿನಿಯಮ ಸಂಖ್ಯೆ: 1977ರ 22, ಪ್ರ. 23ರ ಮೂಲಕ 29ನೇ ಜುಲೈ 1977 ರಿಂದ ಜಾರಿಗೆ ಬರುವಂತೆ ಸೇರಿಸಿದೆ.

[2][ಮತ್ತು ಪರಂತು, ರಾಜ್ಯ ನೌಕರನು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದರೆ ಅಥವಾ ಅದಕ್ಕೆ ತತ್ಸಮಾನವಾದ ಯಾವುದೇ ಇತರ ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದರೆ ಅಂಥ ಪರೀಕ್ಷೆಯಲ್ಲಿ ಉತ್ತೀರ್ಣನಾಗಿರುವುದನ್ನು ತೋರಿಸುವ ಪ್ರಮಾಣಪತ್ರದಲ್ಲಿ ನಮೂದಾಗಿರುವ ಜನ್ಮ ದಿನಾಂಕವನ್ನೇ ಮತ್ತು ವಯಸ್ಸನ್ನೇ ಅವನ ಜನ್ಮ ದಿನಾಂಕವೆಂದು ಮತ್ತು ವಯಸ್ಸೆಂದು ಒಪ್ಪಿಕೊಳ್ಳತಕ್ಕದ್ದು][2]

2. ಅಧಿನಿಯಮ ಸಂಖ್ಯೆ: 1982ರ 22, ಪ್ರ. 02ರ ಮೂಲಕ 25ನೇ ಮೇ 1982 ರಿಂದ ಜಾರಿಗೆ ಬರುವಂತೆ ಸೇರಿಸಿದೆ.

[3][ಮತ್ತು ಪರಂತು, (1)ನೇ ಉಪ–ಪ್ರಕರಣದ ಮೇರೆಗೆ ಮತ್ತು (2)ನೇ ಉಪ–ಪ್ರಕರಣದ ಮೇರೆಗೆ ನೇಮಕ ಪ್ರಾಧಿಕಾರದ ಅಧಿಕಾರಗಳನ್ನು ಸಂವಿಧಾನದ 235ನೇ ಅನುಚ್ಛೇದದ ಮೇರೆಗೆ ಉಚ್ಚನ್ಯಾಯಾಲಯದ ನಿಯಂತ್ರಣಕ್ಕೆ ಒಳಪಟ್ಟಿರುವ ರಾಜ್ಯ ನೌಕರನಿಗೆ ಸಂಬಂಧಪಟ್ಟಂತೆ ಉಚ್ಚನ್ಯಾಯಾಲಯವು ಚಲಾಯಿಸತಕ್ಕದ್ದು.][3]

3. ಅಧಿನಿಯಮ ಸಂಖ್ಯೆ: 1984ರ 13, ಪ್ರ. 02ರ ಮೂಲಕ 10ನೇ ಏಪ್ರಿಲ್ 2004 ರಿಂದ ಜಾರಿಗೆ ಬರುವಂತೆ ಸೇರಿಸಿದೆ.

(3) ಉಪ–ಪ್ರಕರಣ (1)ರಲ್ಲಿ ಮತ್ತು (2)ರಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ ಪ್ರಾರಂಭದ ದಿನಾಂಕಕ್ಕೂ ಮುಂಚೆ, ಜಾರಿಯಲ್ಲಿದ್ದ ನಿಯಮಗಳಿಗೆ ಅನುಸಾರವಾಗಿ ಆತನ ಸೇವಾ ರಿಜಿಸ್ಟರ್‌ನಲ್ಲಿ ಅಥವಾ ಸೇವಾ ಪುಸ್ತಕದಲ್ಲಿ ಅಥವಾ ಇತರ ಯಾವುದೇ ಸೇವಾ ದಾಖಲೆಯಲ್ಲಿ ಒಪ್ಪಿಕೊಂಡಿದ್ದ ಮತ್ತು ದಾಖಲಿಸಿದ್ದ ಆ ರಾಜ್ಯ ನೌಕರನ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು (2)ನೇ ಉಪ–ಪ್ರಕರಣದಲ್ಲಿ ಹೇಳಿರುವ ಸೇವಾ ರಿಜಿಸ್ಟರಿನಲ್ಲಿ ಅಥವಾ ಸೇವಾ ಪುಸ್ತಕದಲ್ಲಿ ಅಥವಾ ಯಾವುದೇ ಇತರ ಸೇವಾ ದಾಖಲೆಯಲ್ಲಿ ಒಪ್ಪಿಕೊಂಡಿದ್ದ ಮತ್ತು ದಾಖಲಿಸಿದ್ದ, ವಯಸ್ಸೆಂದು ಮತ್ತು ಜನ್ಮ ದಿನಾಂಕವೆಂದು ಪರಿಭಾವಿಸತಕ್ಕದ್ದು.

(4) ಒಪ್ಪಿಕೊಂಡಿದ್ದ ಮತ್ತು ದಾಖಲಿಸಿದ್ದ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಅಥವಾ (2)ನೇ ಉಪ–ಪ್ರಕರಣದ ಮೇರೆಗೆ ಅಥವಾ ಸಂದರ್ಭಾನುಸಾರ (3)ನೇ ಉಪ–ಪ್ರಕರಣದ ಮೇರೆಗೆ ಸೇವಾ ರಿಜಿಸ್ಟರ್‌ನಲ್ಲಿ ಅಥವಾ ಸೇವಾ ಪುಸ್ತಕದಲ್ಲಿ ಅಥವಾ ಯಾವುದೇ ಇತರ ಸೇವಾ ದಾಖಲೆಯಲ್ಲಿ ಒಪ್ಪಿಕೊಳ್ಳಲಾಗಿದೆಯೆಂದು ಮತ್ತು ದಾಖಲಿಸಲಾಗಿದೆಯೆಂದು ಪರಿಭಾವಿಸಿರುವ ವಯಸ್ಸನ್ನು ಅಥವಾ ದಾಖಲಿಸಿದ್ದ ಜನ್ಮ ದಿನಾಂಕವನ್ನು 5ನೇ ಪ್ರಕರಣದ ಮೇರೆಗೆ ಏನಾದರೂ ಬದಲಾವಣೆ ಮಾಡಿದ್ದರೆ, ಅದಕ್ಕೆ ಒಳಪಟ್ಟು, ಸಂಬಂಧಪಟ್ಟ ರಾಜ್ಯ ನೌಕರನ ವಯೋನಿವೃತ್ತಿ ಮತ್ತು ನಿವೃತ್ತಿ ಸೇರಿದಂತೆ ಸೇವಾ ಷರತ್ತುಗಳಿಗೆ ಸಂಬಂಧಿಸಿದ ಎಲ್ಲ ಉದ್ದೇಶಗಳಿಗಾಗಿ ಅನ್ವಯವಾಗತಕ್ಕದ್ದು.

**4. ಈ ಅಧಿನಿಯಮದ ಮೇರೆಗೆ ಮಾರ್ಪಾಟು ಮಾಡುವುದರ ಹೊರತು ವಯಸ್ಸನ್ನು ಮಾರ್ಪಾಟು ಮಾಡಲು ನಿಷೇಧ.–** ಯಾವುದೇ ಕಾನೂನಿನಲ್ಲಿ ಅಥವಾ ಮತ್ತು ಯಾವುದೇ ನ್ಯಾಯಾಲಯದ ತೀರ್ಪಿನಲ್ಲಿ, ಡಿಕ್ರಿಯಲ್ಲಿ ಅಥವಾ ಇತರ ಪ್ರಾಧಿಕಾರದ ಆದೇಶದಲ್ಲಿ ಏನೇ ಒಳಗೊಂಡಿದರೂ, ಒಪ್ಪಿಕೊಂಡಿದ್ದ ಅಥವಾ ದಾಖಲಿಸಿದ್ದ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಅಥವಾ 3ನೇ ಪ್ರಕರಣದ ಮೇರೆಗೆ ಅವನ ಸೇವಾ ರಿಜಿಸ್ಟರ್‌ನಲ್ಲಿ ಅಥವಾ ಸೇವಾ ಪುಸ್ತಕದಲ್ಲಿ, ಅಥವಾ ಯಾವುದೇ ಇತರ ದಾಖಲೆಯಲ್ಲಿ ಒಪ್ಪಿಕೊಂಡಿದ್ದ ಅಥವಾ ದಾಖಲಿಸಿದ್ದ ಅಥವಾ ಒಪ್ಪಿಕೊಳ್ಳಲಾಗಿದೆಯೆಂದು ಅಥವಾ ದಾಖಲಿಸಲಾಗಿದೆಯೆಂದು ಪರಿಭಾವಿಸಿದ್ದ, ಆ ರಾಜ್ಯ ನೌಕರನ ವಯಸ್ಸಿನಲ್ಲಿ ಅಥವಾ ಜನ್ಮ ದಿನಾಂಕದಲ್ಲಿ, ರಾಜ್ಯ ನೌಕರನಾಗಿ ಅವನ ಸೇವಾ ಷರತ್ತುಗಳಿಗೆ ಅದು ಸಂಬಂಧಪಡುವಷ್ಟರ ಮಟ್ಟಿಗೆ, 5ನೇ ಪ್ರಕರಣದ ಮೇರೆಗೆ ಹೊರತು ಯಾವುದೇ ಮಾರ್ಪಾಟು ಮಾಡತಕ್ಕದ್ದಲ್ಲ.

**5. ರಾಜ್ಯ ನೌಕರರ ವಯಸ್ಸಿನಲ್ಲಿ ಮತ್ತು ಜನ್ಮ ದಿನಾಂಕದಲ್ಲಿ ಮಾರ್ಪಾಟು ಮಾಡುವುದು.–** (1) ಉಪ–ಪ್ರಕರಣ (2)ಕ್ಕೆ ಒಳಪಟ್ಟು, ರಾಜ್ಯ ಸರ್ಕಾರವು, ರಾಜ್ಯ ನೌಕರನ ಸೇವಾ ರಿಜಿಸ್ಟರ್‌ನಲ್ಲಿ ಅಥವಾ ಸೇವಾ ಪುಸ್ತಕದಲ್ಲಿ ಅಥವಾ ಯಾವುದೇ ಇತರ ಸೇವಾ ದಾಖಲೆಯಲ್ಲಿ ದಾಖಲಿಸಲಾಗಿದೆಯೆಂದು ಅಥವಾ ದಾಖಲಿಸಲಾಗಿದೆಯೆಂದು ಪರಿಭಾವಿಸಿದ್ದ ಆತನ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ವಿಚಾರಣೆ ಮಾಡಿದ ನಂತರ ಯಾವುದೇ ಕಾಲದಲ್ಲಿ ಮಾರ್ಪಾಟು ಮಾಡಬಹುದು:

ಪರಂತು, [1][ರಾಜ್ಯ ನೌಕರನಾದ ನಂತರ][1] ಆತನು ಸಿವಿಲ್ ನ್ಯಾಯಾಲಯದ ಡಿಕ್ರಿಯನ್ನು ಪಡೆದುಕೊಂಡಿದ್ದರೆ ಅದಕ್ಕೆ ಅನುಸಾರವಾಗಿ ಒಪ್ಪಿಕೊಂಡಿದ್ದ ಅಥವಾ ದಾಖಲಿಸಿದ್ದ ಅಥವಾ ಸೇವಾ ರಿಜಿಸ್ಟರಿನಲ್ಲಿ ಅಥವಾ ಸೇವಾ ಪುಸ್ತಕದಲ್ಲಿ ಅಥವಾ ಯಾವುದೇ ಇತರ ಸೇವಾ ದಾಖಲೆಯಲ್ಲಿ ಆತನ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಒಪ್ಪಿಕೊಳ್ಳಲಾಗಿದೆಯೆಂದು ಮತ್ತು ದಾಖಲಿಸಲಾಗಿಯೆಂದು ಪರಿಭಾವಿಸಿದ್ದರೆ ಅಂಥ ಯಾವ ಮಾರ್ಪಾಟನ್ನೂ ಮಾಡತಕ್ಕದ್ದಲ್ಲ :

ಮತ್ತು ಪರತು, ಸಂಬಂದಪಟ್ಟ ರಾಜ್ಯ ನೌಕರನಿಗೆ ಆತನ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡದೆಯೇ ಯಾವ ಮಾರ್ಪಾಟನ್ನೂ ಮಾಡತಕ್ಕದ್ದಲ್ಲ.

(2) ಅವನ ವಯಸ್ಸನ್ನು ಮತ್ತು ಜನ್ಮ ದಿನಾಂಕವನ್ನು ಸೇವಾ ರಿಜಿಸ್ಟರಿನಲ್ಲಿ ಅಥವಾ ಸೇವಾ ಪುಸ್ತಕದಲ್ಲಿ ಅಥವಾ ಯಾವುದೇ ಇತರ ಸೇವಾ ದಾಖಲೆಯಲ್ಲಿ ದಾಖಲಿಸಿದ್ದ ದಿನಾಂಕದಿಂದ ಮೂರು ವರ್ಷಗಳ ಒಳಗಾಗಿ ಅಥವಾ ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಒಂದು ವರ್ಷದ ಒಳಗಾಗಿ ಇದರಲ್ಲಿ ಯಾವುದು ನಂತರ ಬರುತ್ತದೋ, ಅಷ್ಟರೊಳಗಾಗಿ ಈ ಉದ್ದೇಶಕ್ಕಾಗಿ ಅರ್ಜಿಯನ್ನು ಸಲ್ಲಿಸದ ಹೊರತು ರಾಜ್ಯ ನೌಕರನಿಗೆ ಅನುಕೂಲವಾಗುವಂತೆ ಅಂಥ ಯಾವ ಮಾರ್ಪಾಟನ್ನು ಮಾಡತಕ್ಕದ್ದಲ್ಲ.

1. ಅಧಿನಿಯಮ ಸಂಖ್ಯೆ: 1977ರ 22, ಪ್ರ. 3ರ ಮೂಲಕ 29ನೇ ಜುಲೈ 1977 ರಿಂದ ಜಾರಿಗೆ ಬರುವಂತೆ ಸೇರಿಸಿದೆ.

(3) ರಾಜ್ಯ ಸರ್ಕಾರವು, ಈ ಪ್ರಕರಣದ ಮೇರೆಗೆ ವಿಚಾರಣೆಯನ್ನು ಮಾಡುವ ಉದ್ದೇಶಕ್ಕಾಗಿ ಸೂಕ್ತವೆಂದು ತಾನು ಭಾವಿಸಬಹುದಾದಂಥ ಅಧಿಕಾರಿಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆ ಮೂಲಕ ನೇಮಕ ಮಾಡಬಹುದು :

ಪರಂತು, (1)ನೇ ಉಪ–ಪ್ರಕರಣದ ಮೇರೆಗೆ ಮತ್ತು ಈ ಉಪ–ಪ್ರಕರಣದ ಮೇರೆಗೆ ರಾಜ್ಯ ಸರ್ಕಾರದ ಅಧಿಕಾರಗಳನ್ನು,–

(i) ರಾಜ್ಯ ನೌಕರನು, ಸಂವಿಧಾನದ 235ನೇ ಅನುಚ್ಛೇದದ ಮೇರೆಗೆ ಉಚ್ಚನ್ಯಾಯಾಲದ ನಿಯಂತ್ರಣಕ್ಕೊಳಪಟ್ಟಿದ್ದರೆ ನೌಕರನ ವಯಸ್ಸನ್ನು ಅಥವಾ ಜನ್ಮ ದಿನಾಂಕವನ್ನು ಮಾರ್ಪಾಟು ಮಾಡುವುದಕ್ಕೆ ಸಂಬಂಧಪಟ್ಟಂತೆ ಉಚ್ಚ ನ್ಯಾಯಾಲಯವು ಚಲಾಯಿಸತಕ್ಕದ್ದು; ಮತ್ತು

(ii) ರಾಜ್ಯ ನೌಕರನು ಅಧಿಕಾರಿಯಾಗಿದ್ದರೆ ಮತ್ತು ಉಚ್ಚ ನ್ಯಾಯಾಲಯದ ನೌಕರನಾಗಿದ್ದರೆ ನೌಕರನ ವಯಸ್ಸನ್ನು ಅಥವಾ ಜನ್ಮ ದಿನಾಂಕವನ್ನು ಮಾರ್ಪಾಟು ಮಾಡುವುದಕ್ಕೆ ಸಂಬಂಧಪಟ್ಟಂತೆ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ಅಥವಾ ಮುಖ್ಯ ನ್ಯಾಯಾಧೀಶರು ನಿರ್ದೇಶಿಸಬಹುದಾದಂಥ ಇತರ ನ್ಯಾಯಾಧೀಶರು ಅಥವಾ ಅಧಿಕಾರಿಯು ಚಲಾಯಿಸತಕ್ಕದ್ದು.

(4) ಉಪ–ಪ್ರಕರಣ (3)ರ ಮೇರೆಗೆ ನೇಮಕಗೊಂಡ ಅಧಿಕಾರಿಗೆ, ಈ ಮುಂದಿನ ವಿಷಯಗಳಿಗೆ ಸಂಬಂಧಪಟ್ಟಂತೆ ಎಂದರೆ,–

(ಎ) ಯಾರೇ ವ್ಯಕ್ತಿಯನ್ನು ಸಮನು ಮಾಡುವುದಕ್ಕೆ ಮತ್ತು ಅವನು ಹಾಜರಾಗುವಂತೆ ಒತ್ತಾಯ ಮಾಡುವುದಕ್ಕೆ ಹಾಗೂ ಪ್ರಮಾಣ ಮಾಡಿಸಿ ಅವನನ್ನು ಪರೀಕ್ಷಿಸುವುದಕ್ಕೆ:

(ಬಿ) ದಸ್ತಾವೇಜುಗಳನ್ನು ಪತ್ತೆ ಮಾಡುವಂತೆ ಹಾಗೂ ಅವುಗಳನ್ನು ಹಾಜರುಪಡಿಸುವಂತೆ ಅಗತ್ಯಪಡಿಸುವುದಕ್ಕೆ ಮತ್ತು

(ಸಿ) ಅಫಿಡೇವಿಟ್ಟುಗಳಲ್ಲಿ ಸಾಕ್ಷ್ಯವನ್ನು ಸ್ವೀಕರಿಸುವುದಕ್ಕೆ:

(ಡಿ) ಯಾವುದೇ ನ್ಯಾಯಾಲಯದಿಂದ ಅಥವಾ ಕಚೇರಿಯಿಂದ ಯಾವುದೇ ಸಾರ್ವಜನಿಕ ದಾಖಲೆಯನ್ನು ಅಥವಾ ಆ ದಾಖಲೆಯ ಪ್ರತಿಯನ್ನು ತರಿಸಿಕೊಳ್ಳುವುದಕ್ಕೆ,

(ಇ) ಸಾಕ್ಷಿದಾರರುಗಳನ್ನು ಅಥವಾ ದಸ್ತಾವೇಜುಗಳನ್ನು ಪರೀಕ್ಷಿಸುವುದಕ್ಕಾಗಿ ಕಾರ್ಯಾಜ್ಞೆಗಳನ್ನು ಹೊರಡಿಸುವುದಕ್ಕೆ,

– ಸಿವಿಲ್ ಪ್ರಕ್ರಿಯಾ ಸಂಹಿತೆ, 1908 (1908ರ ಕೇಂದ್ರ ಅಧಿನಿಯಮ ಸಂಖ್ಯೆ 5)ರ ಮೇರೆಗೆ ದಾವೆಯನ್ನು ಅಧಿವಿಚಾರಣೆ ಮಾಡುತ್ತಿರುವಾಗ ಸಿವಿಲ್ ನ್ಯಾಯಾಲಯಕ್ಕೆ ಇರುವಂಥವೇ ಅಧಿಕಾರಗಳನ್ನು ಹೊಂದಿರತಕ್ಕದ್ದು.

(5) (ಎ) ಉಪ–ಪ್ರಕರಣ (3)ರ ಮೇರೆಗೆ ನೇಮಕಗೊಂಡ ಅಧಿಕಾರಿಯನ್ನು ಸಿವಿಲ್ ನ್ಯಾಯಾಲಯವೆಂದು ಪರಿಭಾವಿಸತಕ್ಕದ್ದು ಮತ್ತು ಭಾರತ ದಂಡ ಸಂಹಿತೆ 1860 (1860ರ 45)ರ 175ನೇ ಪ್ರಕರಣದಲ್ಲಿ, 178ನೇ ಪ್ರಕರಣದಲ್ಲಿ, 179ನೇ ಪ್ರಕರಣದಲ್ಲಿ, 180ನೇ ಪ್ರಕರಣದಲ್ಲಿ ಅಥವಾ 228ನೇ ಪ್ರಕರಣದಲ್ಲಿ ವಿವರಿಸಿರುವ ಯಾವುದೇ ಅಪರಾಧವನ್ನು, ಸದರಿ ಅಧಿಕಾರಿಯ ಸಮ್ಮುಖದಲ್ಲೇ ಮಾಡಿದಾಗ, ಆ ಅಪರಾಧದ ವಾಸ್ತವ ಸಂಗತಿಗಳನ್ನು ಮತ್ತು ದಂಡ ಪ್ರಕ್ರಿಯಾ ಸಂಹಿತೆ, 1973 (1974ರ 2) ರಲ್ಲಿ ಹೇಳಿರುವಂತೆ ಆಪಾದಿತನ ಹೇಳಿಕೆಯನ್ನು ದಾಖಲಿಸಿದ ನಂತರ, ಅಧಿವಿಚಾರಣೆ ಮಾಡಲು ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಮ್ಯಾಜಿಸ್ಟ್ರೇಟರಿಗೆ ಪ್ರಕರಣವನ್ನು ರವಾನಿಸತಕ್ಕದ್ದು ಮತ್ತು ಅಂಥ ಪ್ರಕರಣವನ್ನು ಯಾರಿಗೆ ರವಾನಿಸಲಾಗಿದೆಯೋ ಆ ಮ್ಯಾಜಿಸ್ಟ್ರೇಟರು, ಆ ಪ್ರಕರಣವನ್ನು ದಂಡ ಪ್ರಕ್ರಿಯಾ ಸಂಹಿತಾ, 1973ರ 346ನೇ ಪ್ರಕರಣದ ಮೇರೆಗೆ ಅದನ್ನು ರವಾನಿಸಿದ್ದರೆ ಹೇಗೆ ಆಪಾದಿತನ ವಿರುದ್ಧ ದೂರನ್ನು ವಿಚಾರಣೆ ಮಾಡುತ್ತಿದ್ದರೋ ಹಾಗೆಯೇ ವಿಚಾರಣೆ ಮಾಡಲು ಮುಂದುವರೆಯತಕ್ಕದ್ದು.

(ಬಿ) ಸದರಿ ಅಧಿಕಾರಿಯ ಮುಂದೆ ಇರುವ ಯಾವುದೇ ವ್ಯವಹರಣೆಗಳನ್ನು ಭಾರತ ದಂಡ ಸಂಹಿತೆ, 1860 (1860ರ 45)ರ 193ನೇ ಪ್ರಕರಣದ ಮತ್ತು 228ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ನ್ಯಾಯಿಕ ವ್ಯವಹರಣೆಗಳೆಂದು ಭಾವಿಸತಕ್ಕದ್ದು.

**6.** **ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಗೆ ನಿಷೇಧ.**– (1) ಈ ಅಧಿನಿಯಮದ ಮೇರೆಗೆ ತೀರ್ಮಾನಿಸಬೇಕಾದಂಥ ಯಾವುದೇ ಪ್ರಶ್ನೆಯನ್ನು ಇತ್ಯರ್ಥಗೊಳಿಸಲು, ತೀರ್ಮಾನಿಸಲು ಅಥವಾ ವ್ಯವಹರಿಸಲು ಯಾವುದೇ ನ್ಯಾಯಾಲಯಕ್ಕೆ ಅಧಿಕಾರ ವ್ಯಾಪ್ತಿ ಇರತಕ್ಕದ್ದಲ್ಲ.

(2) ಈ ನಿಯಮದ ಮೇರೆಗೆ ಕೈಗೊಂಡ ಯಾವುದೇ ತೀರ್ಮಾನವನ್ನು ಯಾವುದೇ ಕಾನೂನು ನ್ಯಾಯಾಲಯದಲ್ಲಿ ಪ್ರಶ್ನಿಸತಕ್ಕದ್ದಲ್ಲ.

The above translation of the Karnataka State Servants (Determination of Age) Act, 1974 (Karnataka Act 22 of 1974) shall be authoritative text in the Kannada Language under section 5A of the Karnataka Official Language Act, 1963.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR-259**

**SC-20**

**ಎಸ್.ಬಿ. ಗುಂಜಿಗಾವಿ,**

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 111 ನಾಸೇಖಾ 2015, ಬೆಂಗಳೂರು, ದಿನಾಂಕ: 28–01–2016.**

ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011 ಮತ್ತು (ತಿದ್ದುಪಡಿ) ಅಧಿನಿಯಮ 2014 ಇದರ ಪ್ರಕರಣ 4ರಲ್ಲಿನ ಹಾಗೂ ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ 1899 (KA.III 1899) ರ ಪ್ರಕರಣ 21 ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಅನುಸೂಚಿಯನ್ನು ಈ ಕೆಳಗಿನಂತೆ ತಿದ್ದುಪಡಿ ಮಾಡಿದೆ. ಅದು ಯಾವುದೆಂದರೆ:–

ಶೀರ್ಷಿಕೆ " 9 – ಆರ್ಥಿಕ ಇಲಾಖೆ" – ಉಪ ಶೀರ್ಷಿಕೆ–I ರ ವಾಣಿಜ್ಯ ತೆರಿಗೆ ಇಲಾಖೆಯ ಸೇವೆಗಳ ಕ್ರಮ ಸಂಖ್ಯೆ:10ರ ನಂತರ ಈ ಕೆಳಕಂಡ ಸೇವೆಯ ನಮೂದುಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು, ಎಂದರೆ:–

| ಕ್ರ. ಸಂ | ಸೇವೆಗಳ ಪಟ್ಟಿ | ಹೆಸರಿಸಲಾದ ಅಧಿಕಾರಿ | ಹೆಸರಿಸಲಾದ ಅಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ | ಸಕ್ಷಮ ಅಧಿಕಾರಿ | ಸಕ್ಷಮ ಅಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ | ಮೇಲ್ಮನವಿ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 11 | ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003 ಸೆಕ್ಷನ್ 16 ರಡಿಯಲ್ಲಿ ವಿಶೇಷ ಲೆಕ್ಕಾಚಾರ ಯೋಜನೆ (Special Accounting Scheme) ಗೆ ಅನುಮತಿ ನೀಡುವುದು. | ಸಂಬಂಧಪಟ್ಟ ಮೌಲ್ಯವರ್ಧಿತ ತೆರಿಗೆ ವಿಭಾಗದ ಜಂಟಿ ಆಯುಕ್ತರು | 30 ಕೆಲಸದ ದಿನಗಳು | ವಾಣಿಜ್ಯ ತೆರಿಗೆಗಳ ಅಪರ ಆಯುಕ್ತರು (ಕೇಂದ್ರ ಕಛೇರಿ) | 15 ಕೆಲಸದ ದಿನಗಳು | ವಾಣಿಜ್ಯ ತೆರಿಗೆಗಳ ಆಯುಕ್ತರು | 15 ಕೆಲಸದ ದಿನಗಳು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಟಿ.ಆರ್.ಶೋಭಾ**
ಆಡಳಿತಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಆಸು–ನಾಸೇ), ಸಕಾಲ ಮಿಷನ್

## PERSONNEL AND ADMINISTRATIVE REFORMS SECRETARIAT

### NOTIFICATION

No. DPAR 111 NASEKHA 2015, BENGALURU DATED: 28-01-2016.

In exercise of the powers conferred by Section 4 of the Karnataka Sakala Services Act, 2011 and (Amendment) Act, 2014, and Section 21 of the Karnataka General Clauses Act, 1899 (KA III, 1899) Government of Karnataka hereby amends the Schedule to the said Act, as specified below.

Under the heading "9 – Finance Department" – Sub Heading – I of Department of Commercial Taxes after services at Sl. No.10 the following service and the entries relating thereto shall be inserted, namely.

| Sl. No. | List of Services | Designated Officer | Time limit for disposal by the Designated Officer | Competent Officer | Time limit for Disposal by the Competent Officer | Appellate Authority | Time limit for disposal by the Appellate Authority |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 11 | Granting of permission for maintaining Special Accounting | Joint Commissioner of the Commercial Taxes of concerned VAT Division | 30 working days | Additional Commissioner of Commercial Taxes (Head Quarters-1) | 15 working days | Commissioner of Commercial Taxes | 15 working days |

| | | | | | | | |
|---|---|---|---|---|---|---|---|
| | Scheme under Sec.16 of KVAT Act 2003. | | | | | | |

**PR.No.275**
**SC.2000**

By Order and in the name of the
Governor of Karnataka
**T.R.SHOBHA**
Administrative Officer &
Ex-Officio Under Secretary to Government
DPAR (AR), Sakala Mission.

## ಸಾರಿಗೆ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಸಾರಿಇ 01 ಸಾಇನಿ 2016, ಬೆಂಗಳೂರು, ದಿನಾಂಕ: 18–02–2016.**

ಕರ್ನಾಟಕ ಮೋಟಾರು ವಾಹನ ತೆರಿಗೆ ಅಧಿನಿಯಮ, 1957 (ಕರ್ನಾಟಕ ಕಾಯ್ದೆ35/1957) ಕಲಂ 16(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಾರ್ವಜನಿಕ ಹಿತದೃಷ್ಟಿಯಿಂದ ಮೇಲ್ಕಂಡ ಕಾಯ್ದೆಯಡಿ ಕರ್ನಾಟಕ ಹೊರತುಪಡಿಸಿ ಮಹಾರಾಷ್ಟ್ರ ರಾಜ್ಯದಲ್ಲಿ ನೋಂದಾಯಿಸಲ್ಪಟ್ಟ ಮತ್ತು ಆ ರಾಜ್ಯದಲ್ಲಿ ತೆರಿಗೆ ಪಾವತಿಸಿರುವ ವಾಹನಗಳಿಗೆ ತೆರಿಗೆ ಪಾವತಿಯಿಂದ ವಿನಾಯಿತಿ ನೀಡಲು ಸರ್ಕಾರವು ತೀಮಾನಿಸಿದ್ದು, ಮಹಾರಾಷ್ಟ್ರ ರಾಜ್ಯದ ವಾಹನಗಳು ಮೋಟಾರು ವಾಹನ ಕಾಯ್ದೆ 1988ರ ಸೆಕ್ಷನ್ 88ರ ಸಬ್ ಸೆಕ್ಷನ್ (8)ರ (ಕೇಂದ್ರ ಕಾಯ್ದೆ 59/88) ಅನುಸಾರ ವಿಶೇಷ ರಹದಾರಿ ಪಡೆದು ದಿನಾಂಕ: 21–02–2016 ರಿಂದ 29–02–2016 ರ ಅವಧಿಯಲ್ಲಿ ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಗೆ ಆಗಮಿಸುವ ಮಹಾರಾಷ್ಟ್ರದ ಪ್ರವಾಸಿ ವಾಹನಗಳಿಗೆ ತೆರಿಗೆ ಪಾವತಿಯಿಂದ ವಿನಾಯಿತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ,
ಮತ್ತು ಅವರ ಹೆಸರಿನಲ್ಲಿ,
**ಕೆ. ಬೀರೇಶ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾರಿಗೆ ಇಲಾಖೆ.

## TRANSPORT SECRETARIAT

## NOTIFICATION

**No. SARIE 01 SAENI 2016, BENGALURU, DATED: 18-02-2016**

In exercise of the powers conferred by sub-Section (1) of section 16 of the Karnataka Motor Vehicle Taxation Act, 1957 (Karnataka Act 35 of 1957), the Government of Karnataka being of the opinion that it is necessary in the public interest so to do hereby exempt the tax payable under the said Act in respect of vehicles registered in the State of Maharastra covered by special permits issued under sub section (8) of section 88 of Motor Vehicles Act, 1988 (Central Act 59 of 1988) which are valid in the State of Karnataka for the period from 21-02-2016 to 29-02-2016, provided for such vehicles tax has already been paid to the State in which they have been registered and the special permits shall cover the visit to Belagavi District in Karnataka.

**PR. 276**
**SC.100**

By Order and in the name of the
Governor of Karnataka
**K. BEERESH**
Under Secretary to Government
Transport Department

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಿಆಸುಇ 140 ನಾಸೇಖಾ 2014 (ಭಾಗ–1) ಬೆಂಗಳೂರು, ದಿನಾಂಕ: 23–01–2016.**

ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ 2011, ಮತ್ತು (ತಿದ್ದುಪಡಿ) ಅಧಿನಿಯಮ 2014ರ (ಕರ್ನಾಟಕ ಅಧಿನಿಯಮ 01, 2012) ಸೆಕ್ಷನ್ 04ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಅನುಸೂಚಿಯನ್ನು ಈ ಕೆಳಗಿನಂತೆ ತಿದ್ದುಪಡಿ ಮಾಡಿದೆ. ಅದು ಯಾವುದೆಂದರೆ,

ಸದರಿ ಅಧಿನಿಯಮದ ಅನುಸೂಚಿಯಲ್ಲಿ :

ಶೀರ್ಷಿಕೆ 10ರ ಕಾರ್ಮಿಕ ಇಲಾಖೆಗೆ ಸಂಬಂಧಿಸಿದಂತೆ ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ 2011ರ ಅನುಸೂಚಿಯಲ್ಲಿ ಕ್ರಮ ಸಂಖ್ಯೆ:09ರ ಅಂಕಣ 2ರಲ್ಲಿನ "ಟ್ರೇಡ್ ಯೂನಿಯನ್ ಅಧಿನಿಯಮ, 1926ರಡಿಯಲ್ಲಿ ನೋಂದಣಿ" ಎಂಬ ಸೇವೆಗೆ ಅಂಕಣ 04 ರಲ್ಲಿ ನಮೂದಿಸಿರುವ "15 ಕೆಲಸದ

ದಿನಗಳು" ಬದಲಿಗೆ "30 ಕೆಲಸದ ದಿನಗಳು" ಎಂದು ಹಾಗೂ ಕ್ರಮ ಸಂಖ್ಯೆ:10ರ ಅಂಕಣ 2ರಲ್ಲಿನ "ಮೋಟಾರು ಸಾರಿಗೆ ಕಾರ್ಮಿಕರ ಅಧಿನಿಯಮ 1961ರಡಿಯಲ್ಲಿ ನೋಂದಣಿ" ಎಂಬ ಸೇವೆಗೆ ಅಂಕಣ 04 ರಲ್ಲಿ ನಮೂದಿಸಿರುವ "30 ಕೆಲಸದ ದಿನಗಳು" ಬದಲಿಗೆ "15 ಕೆಲಸದ ದಿನಗಳು" ಎಂದು ಪರಿಷ್ಕರಿಸಿ ಹೊರಡಿಸಲಾಗಿದೆ.

ಶೀರ್ಷಿಕೆ II–ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯಡಿ ಉಪ ಶೀರ್ಷಿಕೆ– II ರ ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆಗೆ ಸಂಬಂಧಿಸಿದಂತೆ ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ 2011ರ ಅನುಸೂಚಿಯಲ್ಲಿ ಕ್ರಮ ಸಂಖ್ಯೆ:06–ಸಮೂಹ ಬಿ ವೈದ್ಯಕೀಯ ವೆಚ್ಚ ಮರುಪಾವತಿ ಸೇವೆಯಡಿ ಅಂಕಣ 02 ರಲ್ಲಿನ "ಕೇಂದ್ರ ಕಛೇರಿಯ ಇಲಾಖಾ ಮುಖ್ಯಸ್ಥರು ಸಮೂಹ ಎ ಮತ್ತು ಬಿ ವೃಂದದ ಅಧಿಕಾರಿಗಳು" ಸೇವೆಗೆ ಸಂಬಂಧಿಸಿದಂತೆ ಅಂಕಣ 03 ರಲ್ಲಿ ನಿರ್ದೇಶಕರು, ಅಂಕಣ 05 ರಲ್ಲಿ ಉಪ ನಿರ್ದೇಶಕರು ಹಾಗೂ ಅಂಕಣ 07ರಲ್ಲಿ ಜಂಟಿ ನಿರ್ದೇಶಕರು ಎಂದು ನಮೂದಿಸಿರುವ ಬದಲಿಗೆ "ಅಂಕಣ 03 ರಲ್ಲಿ ನಿರ್ದೇಶಕರು, ಅಂಕಣ 05 ರಲ್ಲಿ ಜಂಟಿ/ಉಪ ಕಾರ್ಯದರ್ಶಿಗಳು ಹಾಗೂ ಅಂಕಣ 07 ರಲ್ಲಿ ಸರ್ಕಾರದ ಕಾರ್ಯದರ್ಶಿಗಳು" ಎಂದು ಪರಿಷ್ಕರಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಟಿ.ಆರ್.ಶೋಭಾ**
ಆಡಳಿತಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಆಸು–ನಾಸೇ), ಸಕಾಲ ಮಿಷನ್

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 140 NASEKHA 2014 (P-1) Bengaluru, DATED 23-01-2015**

.

In exercise of the powers conferred by Section 4 of the Karnataka Sakala Services Act, 2011 and (Amendment) Act 2014 (Karnataka Act 1 of 2012), the Government of Karnataka, hereby amends the Schedule appended to the said Act, as follows, namely:-

Under the heading "10 – Labour Department",-

(a) in the entries relating to "Registration under the Trade Union Act, 1926" at serial number 9, in column No.4, for the words and digit "15 working days", the words and digit "30 working days" shall be substituted; and

(b) in the entries relating to "Registration under Motor Transport Workers Act, 1961" at serial number 10, in column No.4, for the words and digit "30 working days", the words and digit "15 working days" shall be substituted.

**PR. 277**
**SC.2000**

By Order and in the name of the
Governor of Karnataka

**T.R.SHOBHA**
Administrative Officer &
Ex-Officio Under Secretary to Government
DPAR (AR), Sakala Mission.

## TRANSPORT SECRETARIAT

### NOTIFICATION

No. SARIE 26 SASUMSE 2015(P) BENGALURU, DATED: 04-09-2015.

Whereas Government of Karnataka is satisfied that in public interest or in the interest of public order, it is necessary or expident so to do, to prohibit strike in following essential service, in Karnataka State Road Transport Corporation, Bengaluru Metropolitan Transport Corporation, North East Karnataka Road Transport Corporation and North West Karnataka Road Transport Corporation.

Now therefore, in exercise of the powers conferred by sub-section (1) of Section 3 of the Karnataka Essential Services Maintenance Act, 2013 (Karnataka Act No- 25 of 2015) Government of Karnataka Prohibits stike in following essential services, namely service in the Karnataka State Road Transport (Corporation, Bengaluru Metropolitan Transport Corporation, North East Karnataka Road Transport Corporation and North West Road Transport Corporation with effect from 07-09-2015.

**PR. 278**
**SC.50**

By Order and in the name of the
Governor of Karnataka
**K. BEERESH**
Under Secretary to Government
Transport Department

## LABOUR SECRETARIAT

### NOTIFICATION

### No. LD 93 LSI 2013 Bengaluru, Dated:18-03-2016

Whereas the draft of the following rules of the Karnataka Civil Services (Absorption of Contract Doctors in the department of Employees State Insurance Scheme Medical Services) (Special), Rules, 2016, was published as required by sub-section (1) of section 3, read with section 8 of the Karnataka State Civil Services Act, 1978 (Karnataka Act 14 of 1990) in Notification No. LD 93 LSI 2013, dated $26^{th}$ February 2016 in Part-IV-A [No.336] of the Karnataka Gazette Extraordinary dated 27-02-2016 inviting objections and suggestions from all persons likely to be affected thereby within fifteen days from the date of publication in the Official Gazette.

And whereas the said Gazette was made available to the Public on 27-02-2016.

And whereas objections and suggestions received have been considered by the Government.

Now therefore, in exercise of the powers conferred by sub-section (1) of section 3, read with section 8 of the Karnataka State Civil Services Act, 1978 (Karnataka Act 14 of 1990), the Government of Karnataka makes the following rules, namely;-

**RULES**

**1.Title and commencement.-** (1) These rules may be called the Karnataka Civil Services (Absorption of Contract Doctors in the Department of Employees State Insurance Scheme Medical Services) (Special) Rules, 2016.

(2) They shall come into force from the date of their publication in the official gazette.

**2. Definitions.-** (1) In these rules, unless the context otherwise requires,-

(a) " Contract Doctor" means, a Doctor who has passed MBBS Degree and appointed in the Department of Employees State Insurance Scheme Medical Services as Insurance Medical Officer on contract basis by the State Government or the Director, ESIS Medical Services as the case may be and who has served as such for not less than one year and continues to work as such on the date of commencement of these rules;

(b) 'Schedule' means Schedule appended to these rules;

(2) Other words and expressions used in these rules, but defined shall have the same meaning respectively assigned to them in Karnataka Civil Services (General Recruitment) Rules, 1977.

**3. Absorption of Contract Doctors appointed in the Department of Employees State Insurance Scheme Medical Services into the State Civil Services.-** Notwithstanding anything contained in the Karnataka Civil Services (General Recruitment) Rules, 1977 or the Department of Employees State Insurance Scheme Medical Services (Recruitment) Rules, 2010 or any other rules made or deemed to have been made under the provisions of the Karnataka Civil Services Act, 1978 (Karnataka Act 14 of 1990), every Contract Doctor specified in column (2) of the schedule who has completed not less than three years of service on the date of commencement of these rules shall, with effect from the date of commencement of these rules, be absorbed, in the category of post and pay scale specified in the columns (6) and (7) of the Schedule in the Department of Employees State Insurance Scheme Medical Service:

Provided further that no such person shall be absorbed,-

(i) if he was disqualified for appointment under the Karnataka Civil Services (General Recruitment) Rules, 1977 on the date of his appointment as Doctor on Contract basis;

(ii) if he does not possess the minimum academic qualification , specified in the relevant rules of recruitment applicable for recruitment to the said posts; and

(iii) in any post reserved for the persons belonging to the Scheduled Caste, or Scheduled Tribes or other Backward Classes unless he belongs to such Caste, tribe or backward Classes, as the case may be.

**4. Pay, pension Leave and Seniority of Persons absorbed under these rules.-** Notwithstanding anything contained in the Karnataka Civil Service Rules,-

(i) the initial basic pay of Contract Insurance Medical Officer shall be fixed at the minimum of the pay scale applicable to the category of post to which he is absorbed under rule 3;

(ii) The service rendered by a person as Contract Insurance Medical Officer prior to the date of absorption shall not count for the purposes of leave, Pay, Pension, seniority and grant of Promotion as Senior Insurance Medical Officer, Chief Insurance Medical Officer, Junior Specialist or Senior Specialist under Time Bound Advance Scheme or for grant of selection time scale of pay.

**5. Application of other rules.-** The provisions of the Karnataka Civil Services Rules, the Karnataka Civil Services (Conduct) Rules, 1966 and all other rules regulating the conditions of service of Government Servants in so far as they are not inconsistent with the provisions of these rules, shall apply to persons absorbed under these rules.

By order and in the name of the Governor of Karnataka

**Lakshmi Devi**

Desk Officer-5,

Labour Department (ESIS Medical Services)

## SCHEDULE -1

**Notification No. LD 93 LSI 2013, Bengaluru Dated : 18-03-2016**

**(See Rule 3)**

| Sl. No. | Name of the IMO and Place of working | Contract Appointment Order No. & Date | Date of Joining | Date of Birth | Post to which absorbed under these rules | Pay Scale of the post in which absorbed | Category |
|---|---|---|---|---|---|---|---|
| (1) | (2) | (3) | (4) | (5) | (6) | (7) | (8) |
| 1. | Dr. Ruksana Tabassum R. E S I Hospital, Hubbali | Govt. Notification No.LD 435 LSI 2004 Dt. 26-07-2008 | 11-8-2008 | 15-04-1979 | IMO | Rs. 28100-50100 | A |
| 2. | Dr. Rizwan Ahmed ESI Dispensary, Karkala | Govt. Notification No.LD 435 LSI 2004 Dt. 26-07-2008 | 10-10-2008 | 01-05-1974 | IMO | Rs. 28100-50100 | A |

**Lakshmi Devi**
Desk Officer-5,
Labour Department, (ESIS Medical Services)

## SCHEDULE -1

**Notification No. LD 93 LSI 2013, Bengaluru Dated : 18-03-2016**

**(See Rule 4)**

| Sl. No. | Category of posts and scale of pay | No. of vacancies to be filled | Minimum qualification |
|---|---|---|---|
| (1) | (2) | (3) | (4) |
| 1. | Insurance Medical Officer Rs. 28100-700-28800-800-33600-900-39000-1050-45300-1200-50100 | 02 | 1) Must possess MBBS Degree or equivalent qualification from an Institution recognized by MCI/KMC<br>2) Must have registered in MCI/KMC |

**Lakshmi Devi**
Desk Officer-5,
Labour Department, (ESIS Medical Services)

**PR-293**
**SC-100**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಡಿಪಿಎಆರ್ 02 ಹೆಚ್‌ಎಂಬಿ 2016 ಬೆಂಗಳೂರು, ದಿನಾಂಕ: 30ನೇ ಜನವರಿ 2016**

ಶ್ರೀ ಟಿ.ಎಂ. ರಂಗಸ್ವಾಮಿ, ಜಂಟಿ ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ, ಇವರು ದಿನಾಂಕ: 01–02–2015ರಿಂದ ಒಂದು ವರ್ಷದ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿತ್ತಿರುತ್ತಾರೆ. ಸದರಿಯವರ ಅವಧಿ ದಿನಾಂಕ: 31–01–2016ರಂದು ಮುಕ್ತಾಯಗೊಳ್ಳಲಿದೆ. ಇವರನ್ನು ಅದೇ ಹುದ್ದೆಯಲ್ಲಿ ಇನ್ನು ಒಂದು ವರ್ಷ ಗುತ್ತಿಗೆ ಆಧಾರದ ಮೇರೆಗೆ ಮುಂದುವರೆಸಲು ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ, ಇವರು ಕೋರಿಕೆ ಸಲ್ಲಿಸಿರುತ್ತಾರೆ.

ಕರ್ನಾಟಕ ಸರ್ಕಾರ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ 1ನೇ ಷೆಡ್ಯೂಲ್‌ನ ಐಟಂ 18ರನ್ವಯ ಶ್ರೀ ಟಿ.ಎಂ. ರಂಗಸ್ವಾಮಿ, ಇವರನ್ನು ದಿನಾಂಕ: 01–02–2016ರಿಂದ 31–01–2017ರವರೆಗೆ ಒಂದು ವರ್ಷದ ಅವಧಿಗೆ ಈ ಹಿಂದೆ ವಿಧಿಸಿರುವ ಸೇವಾ ಷರತ್ತುಗಳನ್ನು ಹಾಗೂ ನಿಬಂಧನೆಗಳನ್ನು ವಿಧಿಸಿ, ಜಂಟಿ ನಿವಾಸಿ ಆಯುಕ್ತರು (ಹೌಸ್ ಕೀಪಿಂಗ್), ಕರ್ನಾಟಕ ಭವನ, ನವದೆಹಲಿ, ಈ ಹುದ್ದೆಯಲ್ಲಿ ಗುತ್ತಿಗೆ ಆಧಾರದ ಮೇರೆಗೆ ಮುಂದುವರೆಸಲು ಸಚಿವ ಸಂಪುಟವು ಅನುಮೋದಿಸಿರುತ್ತದೆ.

ಈ ಹಿನ್ನೆಲೆಯಲ್ಲಿ ಶ್ರೀ ಟಿ.ಎಂ. ರಂಗಸ್ವಾಮಿ, ಅವರನ್ನು ಜಂಟಿ ನಿವಾಸಿ ಆಯುಕ್ತರು (ಹೌಸ್ ಕೀಪಿಂಗ್) ಕರ್ನಾಟಕ ಭವನ, ನವದೆಹಲಿ, ಈ ಹುದ್ದೆಯಲ್ಲಿ, ದಿನಾಂಕ: 01–02–2016ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ (ಯಾವುದು ಮೊದಲೋ ಅಲ್ಲಿಯವರೆಗೆ) ಗುತ್ತಿಗೆ ಆಧಾರದ ಮೇಲೆ ಈ ಹಿಂದೆ ಗುತ್ತಿಗೆಯ ಸೇವೆಯ ಸಂದರ್ಭದಲ್ಲಿ ವಿಧಿಸಿರುವ ಸೇವಾ ಷರತ್ತು ಹಾಗೂ ನಿಬಂಧನೆಗಳಂತೆ ಸೌಲಭ್ಯಗಳು ಹಾಗೂ ಷರತ್ತುಗಳನ್ನು ವಿಧಿಸಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಾ॥ ಬಿ.ಎಸ್. ಮಂಜುನಾಥ ಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ–1)

**PR-294**
**SC-10**

# EDUCATION SECRETARIAT

## NOTIFICATION

### No: ED 30 DPI 2013, Bengaluru Dated:28.03.2016.

The draft of the following rules further to amend the Karnataka Education Department Services (Department of Public Instructions (Recruitment) Rules, 1967, which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause(a) of sub-section (2) of section 3 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objections or suggestion which may be received by the State Government from any person with respect to the said draft before the expiry of the period specified above will be considered by the State Government. Objections or suggestions may be addressed to the Principal Secretary to Government, Education Department (Primary and Secondary Education) M.S. Building, Dr. B.R. Ambedkar Veedhi, Bengaluru-560001.

**DRAFT RULES**

1. **Title and Commencement** :- 1) These rules may be called the Karnataka Education Department Services (Department of Public Instructions) (Recruitment) (Amendment) Rules, 2016.

   2) They shall come into force from the date of their publication in the Official Gazette.

2. **Amendment of Schedule**:- In the Karnataka Education Department Services (Department of Public Instructions) (Recruitment) Rules, 1967, in the schedule :-

(i) for the post of Joint Director (Physical Education) at serial number 3A, and entries relating thereto, the following shall be substituted namely:-

| Sl. No. | Cadre and pay Scale | No of posts | Method of recruitment | Minimun Qualification |
|---|---|---|---|---|
| **1.** | Joint Director (Physical Education) (₹. 40050-56550) | 1 | By Promotion from the cadre of Divisional Deputy Director (Physical Education) | Must have put in a service of not less than two years in the cadre of Divisional Deputy Director (Physical Education)<br>Provided that, if an official who has put in a service of not less than two years is not available, then an official who have put in not less than one year of service may be considered for promotion. |

(ii) For the post of Divisional Deputy Director (Physical Education) at serial number 16D and entries relating thereto, the following shall be substituted, namely:-

| Sl. No. | Cadre and pay Scale | No of posts | Method of recruitment | Minimun Qualification |
|---|---|---|---|---|
| **1.** | Divisional Deputy Director (Physical Education) (₹. 36,300-53850) | 4 | By Promotion from the cadre of District Physical Education Officer | Must have put in a service of not less than three years in the cadre of District Physical Education Officer.<br>Provided that, if an official who has put in a service of not less than three years is not available, then an official who have put in not less than two years of service may be considered for promotion. |

(iii) For the post of District Physical Education Officer, Office of the Deputy Director of Public Instructions (Administration) at serial number 34B and entries relating thereto, the following shall be substituted, namely:-

| Sl. No. | Cadre and pay Scale | No of posts | Method of recruitment | Minimun Qualification |
|---|---|---|---|---|
| **1.** | District Physical Education Officer, Office of the Deputy Director of Public Instructions (Administration)/Senior Assistant Director in the office of the KSEEB/DSERT/CPI Bengaluru (₹. 28100-50100) | 34+3 | By Promotion from the cadre of Physical Education Inspector in the Block Education Office | Must have put in a service of not less than five years in the cadre of Physical Education Inspectors in the Block Education Office.<br>Provided that, if an official who has put in a service of not less than five years is not available, then an official who have put in not less than three year of service may be considered for promotion. |

**PR. 301**
**SC. 25**

By Order and in the name of the Governor of Karnataka
**J.R.ANNAPURNA**
Under Secretary to Government,
Education Department (Admin)

## WOMEN AND CHILD DEVELOPMENT AND EMPOWERMENT OF DIFFERENTLY ABLED AND SENIOR CITIZENS SECRETARIAT

### NOTIFICATION

**No: WCD 348 PHP 2015, BENGALURU, DATED:28.01.2016.**

In exercise of the powers conferred under Sub-Section (1) of Section 32 of the Person with Disabilities (equal Opportunities, Protection of Rights and Full Participation) Act 1995, the Government of Karnataka hereby identifies the post specified in Col. 3,4, & 5 of the Schedule below in respect of the category "A & B " Posts of the disable persons in **Karnataka Residential Educational Institutions Society.**

**SCHEDULE-I**

| Sl. No. | Name of the Department | Blindness or Low Vision | Hearing Impairment | Loco motor Disability of Cerebral palsy |
|---|---|---|---|---|
| 1. | Karnataka Residential Educational Institutions Society | Pre University Residential Science Colleges, Principal (Group-A) | Pre University Residental Science Colleges, Principal (Group-A) | Pre University Residential Science Colleges, Principal (Group-A)(OA.OL) |
| 2. | Karnataka Residential Educational Institutions Society | _ | _ | Lecturer Pre University Residential Science Colleges (Group-B) (OA,OL) |
| 3. | Karnataka Residential Educational Institutions Society | Principal of Morarji Desai/Kitturu Rani Channamma /Atalbihari Vajpayi Residential Colleges, (Group-B) | Principal of Morarji Desai/Kitturu Rani Channamma /Atalbihari Vajpayi Residential Colleges, (Group-B) | Principal of Morarji Desai/Kitturu Rani Channamma /Atalbihari Vajpayi Residential Colleges, (Group-B) (OL,OA) |

In exercise of the powers conferred under Sub-Section(1) of Section 32 of the Person with Disabilities (equal Opportunities, Protection of Rights and Full Participation) Act 1995, the Government of Karnataka hereby identifies the post specified in Col. 3, 4, 5, 6, 7, 8 & 9 of the Schedule below in respect of the category "C & D" Posts of the disable persons in **Karnataka Residential Educational Institutions Society.**

**SCHEDULE-II**

| Sl. No | Name of the Department | Blind | Low Vision | Leprosy Cured | Hearing Impairment | Locomotor Disability | Mentally Ill | Mentally Retarded |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1 | Karnataka Residential Educational Institutions Society. | Language teachers of Morarji Desai/ Kitturu Rani Channamma / Atalbihari Vajpayi Residential Colleges, (Group-C) | Language teachers of Morarji Desai/ Kitturu Rani Channamma / Atalbihari Vajpayi Residential Colleges, (Group-C) | Language teachers of Morarji Desai/ Kitturu Rani Channamma / Atalbihari Vajpayi Residential Colleges, (Group-C) | _ | Language teachers of Morarji Desai/ Kitturu Rani Channama / Atalbihari Vajpayi Residential Colleges, (Group-C) (OA,OL, OAL, BL,) | Language teachers of Morarji Desai/ Kitturu Rani Channama / Atalbihari Vajpayi Residential Colleges, (Group-C) | -- |
| 2 | Karnataka Residential Educational Institutions Society. | Optional Subject Teachers of Morarji Desai/ Kitturu Rani Channamma / Atalbihari Vajpayi Residential College, (Group-C) | Optional Subject Teachers of Morarji Desai/ Kitturu Rani Channamma / Atalbihari Vajpayi Residential College, (Group-C) | Optional Subject Teachers of Morarji Desai/ Kittur/RaniChannamma / Atalbihari Vajpayi Residential College, (Group-C) | _ | Optional Subject Teachers of Morarji Desai/ Kitturu Rani Channamma / Atalbihari Vajpayi Residential Colleges, (Group-C) (OA,OL, OAL & BL) | Optional Subject Teachers of Morarji Desai/Kitturu Rani Channamma / Atalbihari Vajpayi Residential Colleges, (Group-C) | -- |

| Sl. No | Name of the Department | Blind | Low Vision | Leprosy Cured | Hearing Impairment | Locomotor Disability | Mentally Ill | Mentally Retarded |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 3 | Karnataka Residential Educational Institutions Society. | Music Teachers of Morarji Desai/ Kitturu Rani Channamma / Atalbihari Vajpayi Residential Colleges, (Group-C) | Music Teachers of Morarji Desai/ Kitturu Rani Channamma / Atalbihari Vajpayi Residential Colleges, (Group-C) | Music Teachers of Morarji Desai/ Kitturu Rani Channamma / Atalbihari Vajpayi Residential Colleges, (Group-C) | _ | Music Teachers of Morarji Desai/ Kitturu Rani Channamma / Atalbihari Vajpayi Residential Colleges, (Group-C) (OL,BL) | Music Teachers of Morarji Desai/ Kitturu Rani Channamma / Atalbihari Vajpayi Residential Colleges, (Group-C) | -- |
| 4 | Karnataka Residential Educational Institutions Society. | _ | _ | _ | Drawing Teachers of Morarji Desai/Kitturu Rani Channamma/ Atalbihari Vajpayi Residential Colleges, (Group-C) | Drawing Teachers of Morarji Desai/Kitturu Rani Channamma / Atalbihari Vajpayi Residential Colleges, (Group-C) (OA,OL,OAL,BL) | Drawing Teachers of Morarji Desai/Kitturu Rani Channamma / Atalbihari Vajpayi Residential Colleges, (Group-C) | - |
| 5 | Karnataka Residential Educational Institutions Society. | First Division Assistant (Group-C) | First Division Assistant (Group-C) | First Division Assistant (Group-C) | First Division Assistant (Group-C) | First Division Assistant (Group-C) (OA,OL,OAL,BL) | First Division Assistant (Group-C) | - |
| 6 | Karnataka Residential Educational Institutions Society. | _ | Hostel Warden of Morarji Desai/Kitturu Rani Channamma/ Atalbhari Vajpayi Resdential Colleges, (Group-C) | Hostel Warden of Morarji Desai/Kitturu Rani Channamma /Atalbhari Vajpayi Resdential Colleges, (Group-C) | Hostel Warden of Morarji Desai/Kitturu Rani Channamma Atalbhari Vajpayi Resdential Colleges, (Group-C) | Hostel Warden of Morarji Desai/Kitturu Rani Channamma /Atalbhari Vajpayi Resdential Colleges, (Group-C) (OA,OL,BL) | Hostel Warden of Morarji Desai/ Kitturu Rani Channamma / Atalbhari Vajpayi Resdential Colleges, (Group-C) | -- |
| 7 | Karnataka Residential Educational Institutions Society. | _ | Staff Nurse (Group-C) | _ | Staff Nurse (Group-C) | Staff Nurse (Group-C) (OL) | Staff Nurse (Group-C) | _ |
| 8 | Karnataka Residential Educational Institutions Society. | Second Division Assistant (Group-C) | Second Division Assistant (Group-C) | Second Division Assistant (Group-C) | Second Division Assistant (Group-C) | Second Division Assistant (Group-C) (OA,OL,OAL,BL) | Second Division Assistant (Group-C) | _ |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| Sl. No | Name of the Department | Blind | Low Vision | Leprosy Cured | Hearing Impairment | Locomotor Disability | Mentally Ill | Mentally Retarded |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 9 | Karnataka Residential Educational Institutions Society. | _ | Cook (Group-D) | Cook (Group-D) | Cook (Group-D) | Cook (Group-D) (OL) | Cook (Group-D) | Cook (Group-D) MR (Mild) |
| 10 | Karnataka Residential Educational Institutions Society. | Kitchen Porter (Group-D) | Kitchen Porter (Group-D) | Kitchen Porter (Group-D) | Kitchen Porter (Group-D) | Kitchen Porter (Group-D) (OL) | Kitchen Porter (Group-D) | Kitchen Porter (Group-D) MR (Mild) |
| 11 | Karnataka Residential Educational Institutions Society. | Sweepers/Cleaners & REL (Group-D) | Sweepers/Cleaners & REL (Group-D) | Sweepers/Cleaners & REL (Group-D) | Sweepers/ Cleaners & REL (Group-D) | Sweepers/Cleaners & REL (Group-D) (OL) | Sweepers/Cleaners & REL (Group-D) | Sweepers/ Cleaners & REL (Group-D) MR (Mild) |
| 12 | Karnataka Residential Educational Institutions Society. | Peon (Group-D) | Peon (Group-D) | Peon (Group-D) | Peon (Group-D) | Peon (Group-D) (OL,BL) | Peon (Group-D) | Peon (Group-D) MR (Mild) |

This Order is issued as per the DPAR Services Rules-1 vide Order No. DPAR 273 SeNaNi 2013 Dated: 13/03/2015.

By Order and in the name of the Governor of Karnataka,

**JAYALAKSHMI,**

Under Secretary to Government-2,

Department of Women & Child Development & Empowerment of Differently Abled and Senior Citizens.

**PR. 134**
**SC.500**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59